# ಕಲಿಕೆಯ ಬಲವರ್ಧನೆಗಾಗಿ ಸಹ-ವಿದ್ವತ್ ಚಟುವಟಿಕೆಗಳು

## ಉದಯ್ ಶಾಲೆಗಳು, ಸವಾಯಿ ಮಾಧೋಪುರ್, ರಾಜಸ್ಥಾನ

**ವಿಷ್ಣು ಗೋಪಾಲ್**

ಗ್ರಾಮೀಣ ಶಿಕ್ಷಣ ಕೇಂದ್ರವು[i] (GSK) 2005 ರಿಂದ ಉದಯ್ ಸಮುದಾಯ ಶಾಲೆಗಳ ಮೂಲಕ ಮಕ್ಕಳೊಂದಿಗೆ ಕೆಲಸ ಮಾಡುತ್ತಿದೆ. ಮಕ್ಕಳು ಚೆನ್ನಾಗಿ ಕಲಿಯಬೇಕೆಂದರೆ, ಅತ್ಯಂತ ಮುಖ್ಯವಾದ ತರಗತಿಯ ಪ್ರಕ್ರಿಯೆಗಳನ್ನು, ಇತರ ಕಾರ್ಯತಂತ್ರಗಳನ್ನು ಬಳಸಿ ಬಲವರ್ಧಿಸಬೇಕು ಎಂದು ನಾವು ನಮ್ಮ ಕೆಲಸದ ಮೂಲಕ ಅರಿತುಕೊಂಡಿದ್ದೇವೆ. ಶಿಕ್ಷಕರು ಪಠ್ಯಪುಸ್ತಕಗಳಿಂದಾಚೆ ಹೋಗಿ ಮಕ್ಕಳು ತಮ್ಮ ತಿಳುವಳಿಕೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಮತ್ತು ತಮ್ಮ ಪ್ರಪಂಚವನ್ನು ಅನ್ವೇಷಿಸಲು ಸಹಾಯ ಮಾಡುವ ಅವಕಾಶಗಳನ್ನು ಸೃಷ್ಟಿಸಬೇಕು. ಒಂದು ವಿಚಾರವನ್ನು ಕಾರ್ಯರೂಪಕ್ಕೆ ಪರಿವರ್ತಿಸಲು ಮಕ್ಕಳನ್ನು ಪ್ರೋತ್ಸಾಹಿಸಿದಾಗ, ಅವರು ವಿವಿಧ ವಿಷಯಗಳಲ್ಲಿ ಕಲಿತದ್ದನ್ನು ಒಟ್ಟುಗೂಡಿಸಿ ಅವುಗಳ ನಡುವೆ ಸಂಪರ್ಕವನ್ನು ಸೃಷ್ಟಿಸುವ ಅವಕಾಶವನ್ನು ಪಡೆಯುತ್ತಾರೆ. ಈ ಪ್ರಕ್ರಿಯೆಯ ಮೂಲಕ, ಅವರು ತಮ್ಮ ತರಗತಿಯ ಕಲಿಕೆಯನ್ನು ಗ್ರಹಿಸಲು ಮತ್ತು ಸಂಯೋಜಿಸಲು ಸಾಧ್ಯವಾಗುತ್ತದೆ. ಇದು ಕೇವಲ ವಿಷಯ-ನಿರ್ದಿಷ್ಟ ತರಗತಿ-ಕಲಿಕೆಯ ಮೂಲಕ ಸಾಧ್ಯವಾಗದಿರಬಹುದು.

| |
|---|
| ಉದಯ್ ಸಮುದಾಯ ಶಾಲೆಗಳ ಮೂಲಕ, ಗ್ರಾಮೀಣ ಶಿಕ್ಷಣ ಕೇಂದ್ರವು ಬೋಧನೆ-ಕಲಿಕೆ ಪ್ರಕ್ರಿಯೆಯ ಭಾಗವಾಗಿ ಕಲಿಕೆಯನ್ನು ಬಲವರ್ಧಿಸಲು ಸಹಾಯ ಮಾಡುವ ವಿವಿಧ ಚಟುವಟಿಕೆಗಳನ್ನು ಆಂಭಿಸುವ ಅಭ್ಯಾಸ ಮಾಡಿಕೊಂಡಿದೆ. ಕಲಿಕೆಯನ್ನು ಹಲವಾರು ತಂತ್ರಗಳ ಮೂಲಕ ಬಲವರ್ಧಿಸಬೇಕು ಮತ್ತು ಅದು ಕೇವಲ ಪಠ್ಯಪುಸ್ತಕಗಳಿಂದ ಆಗುವ ಕಲಿಕೆಗೆ ಸೀಮಿತವಾಗಿಲ್ಲ ಎಂದು ನಾವು ನಂಬುತ್ತೇವೆ. ಜಾನ್ ಡೆವಿ ಸಹ ಕಲಿಕೆಯಲ್ಲಿ ಅನುಭವಗಳ ಪ್ರಾಮುಖ್ಯತೆಯನ್ನು ಒತ್ತಿಹೇಳುತ್ತಾನೆ. ತರಗತಿಯಲ್ಲಿ ಆರ್ಜಿಸಿಕೊಂಡಿರುವ ವಿಷಯದ ಜ್ಞಾನವನ್ನು, ವಿದ್ಯಾರ್ಥಿಗಳಿಗೆ ಹೊಸ ಸಂದರ್ಭಗಳಲ್ಲಿ ಸಂಯೋಜಿಸಲು, ಗ್ರಹಿಸಲು ಮತ್ತು ಅನ್ವಯಿಸಲು ಸಹಾಯ ಮಾಡುವ ಪ್ರಾಯೋಗಿಕ ಅನ್ವಯಿಕೆಗಳಾಗಿ ಬದಲಾಯಿಸಲು ನಮ್ಮ ತಂತ್ರಗಳು ಸಹಾಯ ಮಾಡುತ್ತವೆ. ಈ ವಿಧಾನವು ಗಾರ್ಡನರ್ ನ ಬಹು ಬುದ್ಧಿವಂತಿಕೆಯ ಸಿದ್ಧಾಂತದಿಂದ ಸಹ ಪ್ರಭಾವಿತವಾಗಿದೆ.[ii] |

ಈ ಲೇಖನದಲ್ಲಿ, ನಾವು ಉದಯ್ ಶಾಲೆಗಳಲ್ಲಿ ಬಳಸುವ ಕೆಲವು ವಿಧಾನಗಳು ಮತ್ತು ತಂತ್ರಗಳನ್ನು ಹಂಚಿಕೊಳ್ಳುತ್ತಿದ್ದೇವೆ.

**ಕೆಲವು ವಿಧಾನಗಳು ಮತ್ತು ತಂತ್ರಗಳು**

ಈ ಚಟುವಟಿಕೆಗಳ ವಿವರಗಳತ್ತ ಕಣ್ಣಾಡಿಸುವ ಮೊದಲು, ಇಲ್ಲಿ ಓದುತ್ತಿರುವ ಮಕ್ಕಳ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವುದು ಅಗತ್ಯ. ಸವಾಯಿ ಮಾಧೋಪುರ್ ಭಾರತದ 100 ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿದೆ. ಈ ಪ್ರದೇಶದಲ್ಲಿ ಅಸ್ತಿತ್ವದಲ್ಲಿದ್ದ ಕಳಪೆ ಗುಣಮಟ್ಟದ ಶಿಕ್ಷಣದ ಕಾರಣ, ಆ ಸಮುದಾಯವು ಶಿಕ್ಷಣವು ನಿಷ್ಪ್ರಯೋಜಕವಾಗಿದ್ದು, ಅದರಿಂದ ಸರ್ಕಾರಿ ಉದ್ಯೋಗವನ್ನೂ ಗಿಟ್ಟಿಸಲೂ ಸಾಧ್ಯವಿಲ್ಲ ಹಾಗೂ ಮಕ್ಕಳು ಕೃಷಿ ಮಾಡುವ ಸಾಮರ್ಥ್ಯವನ್ನೂ ಪಡೆಯುವುದಿಲ್ಲ ಎಂದು ಭಾವಿಸಿತ್ತು. ಶಾಲಾ ಶಿಕ್ಷಣ ಎಂದರೆ, ಸರ್ಕಾರಿ ಶಾಲೆಗಳಲ್ಲಿ ಕಂಠಪಾಠ ಮಾಡುವುದು ಮತ್ತು ದೈಹಿಕ ಶಿಕ್ಷೆ ಎಂದೂ ಮತ್ತು ಖಾಸಗಿ ಶಾಲೆಗಳೆಂದರೆ ಸಮವಸ್ತ್ರ ಮತ್ತು ಇಂಗ್ಲಿಷ್ ಮಾಧ್ಯಮವೆಂದೂ ಅರ್ಥೈಸಲಾಗಿತ್ತು. ಕಲಿಕೆಯ ಆನಂದ ಹಾಗೂ ಶಾಲಾ ಶಿಕ್ಷಣ ಮತ್ತು ಜೀವನದ ನಡುವಿನ ಕೊಂಡಿಗಳು ಕಾಣೆಯಾಗಿದ್ದವು. ಒಂದು ಪರ್ಯಾಯ ಮಾದರಿಯನ್ನು ಪ್ರದರ್ಶಿಸಲು ಮತ್ತು ಶಿಕ್ಷಣದ ಪ್ರಸ್ತುತತೆಯನ್ನು ಕಂಡುಕೊಳ್ಳುವಂತೆ ಪೋಷಕರಿಗೆ ಸಹಾಯ ಮಾಡಲು ಗ್ರಾಮೀಣ ಶಿಕ್ಷಣ ಕೇಂದ್ರವನ್ನು ಸ್ಥಾಪಿಸಲಾಗಿದೆ.

- **ಸಂಗೀತ ಮತ್ತು ಪ್ರಾಸ:** ಸಂಗೀತ ಮತ್ತು ಪ್ರಾಸವು ಮಕ್ಕಳು ತಮ್ಮನ್ನು ತಾವು ವ್ಯಕ್ತಪಡಿಸಲು ಮತ್ತು ಹೆಚ್ಚು ಮುಕ್ತವಾಗಿ ಸಂವಹನ ನಡೆಸಲು ಸಹಾಯ ಮಾಡುತ್ತದೆ. ಸಂಗೀತವನ್ನು ಕಲಿಯಲು ನಡೆಸುವ ಪುನರಾವರ್ತನೆಯು ಅವರ ಭಾಷಾ ಕೌಶಲ್ಯಗಳನ್ನು ಹೆಚ್ಚಿಸುತ್ತದೆ ಮತ್ತು ಅಭಿವ್ಯಕ್ತಿ ಮತ್ತು ಬಳಕೆಯಲ್ಲಿನ ವೈವಿಧ್ಯತೆಯನ್ನು ಗ್ರಹಿಸಲು ಸಹಾಯ ಮಾಡುತ್ತದೆ.
- **ಸೃಜನಾತ್ಮಕ ಬರವಣಿಗೆ:** ಸೃಜನಾತ್ಮಕ ಬರವಣಿಗೆಯು ಅಭಿವ್ಯಕ್ತಿಯನ್ನು ಕಲಿಯುವ ಮತ್ತು ಅಭ್ಯಸಿಸುವ ಪ್ರಮುಖ ಅಂಶವಾಗಿದೆ. ಮಕ್ಕಳಿಗೆ ಬರವಣಿಗೆಯನ್ನು ಅಭ್ಯಾಸ ಮಾಡಲು ನಾವು ಅವಕಾಶಗಳನ್ನು ಸೃಷ್ಟಿಸುತ್ತೇವೆ. ಇದರಿಂದ ಅವರು ತಮ್ಮ ಕಲ್ಪನೆಯನ್ನು ಬೆಳೆಸಿಕೊಳ್ಳುತ್ತಾರೆ, ಪ್ರಪಂಚವನ್ನು ವಿಭಿನ್ನವಾಗಿ ನೋಡುತ್ತಾರೆ, ಭಾಷೆಯ ಸೂಕ್ಷ್ಮ ವ್ಯತ್ಯಾಸಗಳನ್ನು ಗ್ರಹಿಸುತ್ತಾರೆ ಮತ್ತು ಮುಖ್ಯವಾಗಿ, ಅದನ್ನು ಆನಂದಿಸಲು ಕಲಿಯುತ್ತಾರೆ.
- **ಕಲೆಗಳು**: "ಉದಯ್"ನಲ್ಲಿರುವ ಎಲ್ಲಾ ಮಕ್ಕಳು ದೃಶ್ಯ ಮತ್ತು ಪ್ರದರ್ಶನ ಕಲೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಬಣ್ಣಗಳೊಂದಿಗೆ ಆಟವಾಡುವ ಮತ್ತು ಹೊಸ ಬಣ್ಣಗಳನ್ನು

ರಚಿಸುವ ಕ್ರಿಯೆಯು, ಮಕ್ಕಳು ಕಪ್ಪು ಹಲಗೆಯ ಮೇಲೆ ಬಿಡಿಸಿರುವ ಚಿತ್ರವನ್ನು ನಕಲು ಮಾಡುವುದಕ್ಕೆ ವಿರುದ್ಧವಾಗಿ ತಮ್ಮನ್ನು ತಾವು ಹೆಚ್ಚು ವಿಶ್ವಾಸಾರ್ಹವಾಗಿ ವ್ಯಕ್ತಪಡಿಸಿಕೊಳ್ಳಲು ಸಹಾಯ ಮಾಡುತ್ತದೆ. ರಂಗಭೂಮಿಯನ್ನು ಕಲೆಯ ನೇರ ರೂಪವಾಗಿ ನೋಡಲಾಗುತ್ತದೆ. ಇದರಲ್ಲಿ ಮಕ್ಕಳು ತಮ್ಮ ಆಲೋಚನೆಗಳು ಮತ್ತು ಅನುಭವಗಳನ್ನು ವ್ಯಕ್ತಪಡಿಸಲು ತಮ್ಮ ದೇಹವನ್ನು ಬಳಸುತ್ತಾರೆ - ರಂಗಭೂಮಿಯ ಮೂಲಕ ಅವರು ಅನೇಕ ಪಾತ್ರಗಳ ಜೀವನವನ್ನು ನಡೆಸುತ್ತಾರೆ ಮತ್ತು ತಮ್ಮದೇ ಆದ ತಿಳುವಳಿಕೆಯನ್ನು ನಿರ್ಮಿಸುತ್ತಾರೆ. ಮಕ್ಕಳು ತಾವು ಓದಿದ ಕಥೆಗಳನ್ನು ನಾಟಕೀಕರಿಸಲು ಪ್ರೋತ್ಸಾಹಿಸಲಾಗುತ್ತದೆ. ಶಾಲೆಯಲ್ಲಿ ನೃತ್ಯವೂ ಸಹ ದೈನಂದಿನ ಚಟುವಟಿಕೆಯ ಸಹಜ ಭಾಗವೆನಿಸಿದೆ. ಈ ಹಲವು ಕಲಾತ್ಮಕ ಅಭಿವ್ಯಕ್ತಿಗಳು ತರಗತಿಯಲ್ಲಿನ ಕಲಿಕೆಯಿಂದ ಪ್ರೇರಿತವಾಗಿವೆ.

- **ಕೈಗೆಲಸ ಮಾಡುವುದು:** ಉದಯ್ ಶಾಲೆಗಳಲ್ಲಿನ ಎಲ್ಲಾ ಮಕ್ಕಳು ಮರಗೆಲಸ ಮತ್ತು ಕುಂಬಾರಿಕೆಯೊಂದಿಗೆ ನಿಯಮಿತವಾಗಿ ತೊಡಗಿಸಿಕೊಂಡಿದ್ದಾರೆ. ಮರಗೆಲಸವು ಅವರನ್ನು ಸೌಂದರ್ಯ ಪ್ರಜ್ಞೆಯ ಅಂಶಗಳಿಗೆ ಒಡ್ಡುತ್ತದೆ ಮತ್ತು ಗಣಿತ ಮತ್ತು ವಿಜ್ಞಾನದಲ್ಲಿ ಕಲಿತ ತತ್ವಗಳನ್ನು ನಿಜ ಜೀವನಕ್ಕೆ ಅನ್ವಯಿಸಲು ಸಹಾಯ ಮಾಡುತ್ತದೆ. ಜೇಡಿಮಣ್ಣಿನಿಂದ ವಿವಿಧ ರೂಪಗಳನ್ನು ರಚಿಸುತ್ತಾ ಮತ್ತು ಮರುಸೃಷ್ಟಿಸುತ್ತಾ, ವಿದ್ಯಾರ್ಥಿಗಳು ಕುಂಬಾರಿಕೆ ಮಾಡುವಾಗ ನಶ್ವರತೆ ಮತ್ತು ಒಂದೇ ವಸ್ತುವಿನೊಂದಿಗೆ ಹೊಸ ರೂಪಗಳ ಮರುಸೃಷ್ಟಿಯನ್ನು ಅನುಭವಿಸುತ್ತಾರೆ.
- **ಪಠ್ಯಪುಸ್ತಕಗಳಿಂದಾಚೆ**:

- ವಿವಿಧ ಅನುಭವಗಳಿಗೆ ಒಡ್ಡಿಕೊಳ್ಳಲು ಮಾಡುವ ಭೇಟಿಗಳು ವಿದ್ಯಾರ್ಥಿಗಳನ್ನು ಅವರು ತಮ್ಮ ಸುತ್ತಲೂ ನೋಡುವ ಸಮಸ್ಯೆಗಳೊಂದಿಗೆ ತೊಡಗಿಸಿಕೊಳ್ಳಲು ಮತ್ತು ಚರ್ಚಿಸುವ ಅವಕಾಶವನ್ನು ಪಡೆಯಲು ಅನುವು ಮಾಡಿಕೊಡುತ್ತವೆ. ಇವುಗಳು ಅವರು ಅಧ್ಯಯನ ಮಾಡುತ್ತಿರುವ ವಿಷಯಕ್ಕೆ ಸಂಬಂಧಿಸಿರಬಹುದು ಮತ್ತು ಇತರ ಗ್ರಾಮಗಳು, ಹೊಲಗಳು, ಅರಣ್ಯ ಪ್ರದೇಶಗಳು, ವಿಶೇಷ ತೋಟಗಳು, ಸರ್ಕಾರಿ ಕಚೇರಿಗಳು, ಕೈಗಾರಿಕಾ ಘಟಕಗಳು ಇತ್ಯಾದಿಗಳೂ ಆಗಿರಬಹುದು.
- ವಿದ್ಯಾರ್ಥಿಗಳು ಒಂದು ಯೋಜನೆಯನ್ನು ಕ್ರಿಯೆಯಾಗಿ ಪರಿವರ್ತಿಸಲು ಸಹಾಯ ಮಾಡುವ ವೈಯಕ್ತಿಕ ಮತ್ತು ಪಂಗಡ ಯೋಜನೆಗಳಲ್ಲಿ ಸಹ ಕೆಲಸ ಮಾಡುತ್ತಾರೆ. ಸಹವರ್ತಿ ಕಲಿಕೆ, ಯೋಜನೆ, ಸಮನ್ವಯ, ಸಂವಹನ ಮತ್ತು ಕಾರ್ಯಗತಗೊಳಿಸುವಿಕೆಯು ಮಕ್ಕಳ ಪ್ರಾಜೆಕ್ಟ್ ಕೆಲಸದ ಪ್ರಮುಖ ಅಂಶಗಳಾಗಿವೆ.

- ವಿದ್ಯಾರ್ಥಿಗಳು ಕಾರ್ಮಿಕರು, ರೈತರು, ಜನಪ್ರತಿನಿಧಿಗಳು, ಅಂಗಡಿಯವರು ಮತ್ತು ಸರ್ಕಾರಿ ಅಧಿಕಾರಿಗಳಂತಹ ವ್ಯಾಪಕ ಶ್ರೇಣಿಯ ಜನರನ್ನು ಭೇಟಿ ಮಾಡಿ ಅವರ ಕೆಲಸ ಮತ್ತು ಅವರ ಪ್ರಪಂಚವನ್ನು ಅರ್ಥಮಾಡಿಕೊಂಡು ಅವರೊಂದಿಗೆ ತೊಡಗಿಸಿಕೊಳ್ಳುವಂತೆ ಪ್ರೋತ್ಸಾಹಿಸಲಾಗುತ್ತದೆ. ಸಂದರ್ಶನಗಳ ಮೂಲಕ ಈ ಸಂವಾದಕ್ಕೆ ಸಿದ್ಧರಾಗಲು ಮತ್ತು ಪಡೆದ ಮಾಹಿತಿಯನ್ನು ವಿಶ್ಲೇಷಿಸಲು ಮಕ್ಕಳನ್ನು ಪ್ರೋತ್ಸಾಹಿಸಲಾಗುತ್ತದೆ.

- **ಪ್ರಕೃತಿಯೊಂದಿಗೆ ತೊಡಗಿಸಿಕೊಳ್ಳುವಿಕೆ**: ವಿದ್ಯಾರ್ಥಿಗಳು ಕಾಲೋಚಿತ ತರಕಾರಿಗಳನ್ನು ಬೆಳೆದು ಎಲ್ಲಾ ರೀತಿಯ ಬೀಜದ ಸಂಪೂರ್ಣ ಬೆಳವಣಿಗೆಯ ಚಕ್ರವನ್ನು ಗಮನಿಸುತ್ತಾ, ಅದರ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುತ್ತಾರೆ. ಅವರು ಪೋಷಕಾಂಶಗಳು, ಅವುಗಳ ಪ್ರಯೋಜನಗಳು ಮತ್ತು ಕೃಷಿ ಕಾರ್ಯಾಚರಣೆಗಳ ಪ್ರಾಮುಖ್ಯತೆಯ ಬಗ್ಗೆ ಕಲಿಯುತ್ತಾರೆ. ಆಹಾರವನ್ನು ಬೆಳೆಯುವುದು ವಿಷಯದ ಬಗೆಗಿನ ಅವರ ತಿಳುವಳಿಕೆಯನ್ನು ಬಲಪಡಿಸಲು ಸಹಾಯ ಮಾಡುತ್ತದೆ ಮತ್ತು ಸಂತೋಷದಾಯಕ ಅನುಭವ ನೀಡುತ್ತದೆ. ಇದರ ಸ್ವಾಭಾವಿಕ ಪ್ರಗತಿಯೆಂದರೆ ಕುಕಿಂಗ್ (ಅಡುಗೆ ಮಾಡುವ) ಕ್ಲಬ್. ಇಲ್ಲಿ ಮಕ್ಕಳು ದೇಶದ ವಿವಿಧ ಭಾಗಗಳ ಹೊಸ ಆಹಾರವನ್ನು ತಯಾರಿಸಲು ಕಲಿಯುತ್ತಾರೆ ಮತ್ತು ಇತರ ಪ್ರದೇಶಗಳ ಜನರ ಬಗ್ಗೆ ತಿಳಿದುಕೊಳ್ಳುತ್ತಾರೆ.

- **ಕ್ರೀಡೆಗಳು**: ಉದಯ್ ಶಾಲೆಗಳಲ್ಲಿ ಕ್ರೀಡಾ ಅವಧಿಯು ಪ್ರತಿ ಮಗುವಿನ ದೈನಂದಿನ ಚಟುವಟಿಕೆಯ ಅಂಗವಾಗಿದೆ. ಮಕ್ಕಳು ತಮ್ಮ ಆಯ್ಕೆಯ ಕ್ರೀಡೆ ಅಥವಾ ಆಟಕ್ಕೆ ಸೇರುತ್ತಾರೆ. ಅದು ವೈಯಕ್ತಿಕ ಅಥವಾ ಗುಂಪು; ಒಳಾಂಗಣ ಅಥವಾ ಹೊರಾಂಗಣ ಕ್ರೀಡೆ ಆಗಿರಬಹುದು. ಕ್ರೀಡೆಯನ್ನು ಹೆಚ್ಚು ಗಂಭೀರವಾಗಿ ತೆಗೆದುಕೊಳ್ಳಲು ಬಯಸುವ ಮಕ್ಕಳಿಗೆ, ಅಭ್ಯಾಸಕ್ಕಾಗಿ ಹೆಚ್ಚುವರಿ ಸಮಯಕ್ಕೆ ಸ್ಥಳಾವಕಾಶವಿದೆ. ಕ್ರೀಡೆಗಳು ವಿದ್ಯಾರ್ಥಿಗಳಿಗೆ ಸಾಂಘಿಕ ಕೆಲಸ, ನಾಯಕತ್ವ, ಸಮನ್ವಯ, ನಿರ್ಧಾರ-ಮಾಡುವಿಕೆ, ಕಾರ್ಯತಂತ್ರದ ಅಭಿವೃದ್ಧಿ, ಕಾರ್ಯತಂತ್ರದ ಕಾರ್ಯಗತಗೊಳಿಸುವಿಕೆ ಮತ್ತು ಅವರ ಕಾರ್ಯಕ್ಷಮತೆಯ ಸ್ವ-ಮೌಲ್ಯಮಾಪನ ಮತ್ತು, ಮುಖ್ಯವಾಗಿ, ತಮ್ಮ ಸಹವರ್ತಿಗಳಿಂದ ಹಿಮ್ಮಾಹಿತಿಯನ್ನು ಸ್ವೀಕರಿಸುವ ಮತ್ತು ಅದನ್ನು ನೀಡುವ ಸಿದ್ಧತೆಯನ್ನು ಉತ್ತೇಜಿಸುತ್ತದೆ. ಕ್ರೀಡೆಗಳನ್ನು ಘನತೆಯಿಂದ ಸೋಲೊಪ್ಪಿಕೊಳ್ಳುವ ಮತ್ತು ವೈಫಲ್ಯದಿಂದ ಪುಟಿದೇಳುವುದರ ಕಲಿಕೆಯಂತೆ ಸಹ ಪ್ರೋತ್ಸಾಹಿಸಲಾಗುತ್ತದೆ.

- **ವಿಜ್ಞಾನ ಪ್ರದರ್ಶನಗಳು**: ಉದಯ್‌ನಲ್ಲಿರುವ ಮಕ್ಕಳು ಶಾಲೆಯಲ್ಲಿ ತಾವು ಕಲಿತದ್ದನ್ನು ತಮ್ಮ ತಿಳುವಳಿಕೆ/ಕಲಿಕೆಯನ್ನು ಪ್ರತಿನಿಧಿಸುವ ಮಾದರಿಗಳು ಅಥವಾ ಇತರ ರೂಪಗಳಾಗಿ ಪರಿವರ್ತಿಸಲು ಪ್ರಯತ್ನಿಸುತ್ತಾರೆ. ಪ್ರತಿ ಶಾಲೆಯಲ್ಲಿಯೂ ವಾರ್ಷಿಕ ವಿಜ್ಞಾನ ವಸ್ತುಪ್ರದರ್ಶನಗಳು ಸಾಮಾನ್ಯ ಲಕ್ಷಣವಾಗಿವೆ. ಇತರರಿಗೆ ವಿವರಿಸುವುದು, ವಿದ್ಯಾರ್ಥಿಗಳು ಪರಿಕಲ್ಪನೆಗಳನ್ನು ಹೆಚ್ಚು ಆಳವಾಗಿ ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಇದು ಅವರು ಉತ್ತರಗಳನ್ನು ಬಯಸುವ ಪ್ರಶ್ನೆಗಳನ್ನು ಸರಿಯಾಗಿ ರೂಪಿಸಲು ಸಹ ಸಹಾಯ ಮಾಡುತ್ತದೆ. ಪ್ರದರ್ಶನಗಳು ಸಹವರ್ತಿ ಕಲಿಕೆಯನ್ನು ಸಹ ಸುಗಮಗೊಳಿಸುತ್ತವೆ ಮತ್ತು ಪೋಷಕರಿಗೆ ತಮ್ಮ ಮಗುವಿನ ಕಲಿಕೆಯ ಕುರಿತಾದ ಪ್ರತಿಯೊಂದು ಮಾಹಿತಿ ದೊರೆಯಲು ಸಹಾಯ ಮಾಡುತ್ತವೆ.
- **ಶಾಲಾ ಆಡಳಿತ**: ವಾರ್ಷಿಕ ಶಾಲಾ ಪಂಚಾಯತ್ ಚುನಾವಣೆಗಳು ಮಕ್ಕಳಿಗೆ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳ ಸವಿಯನ್ನು ತೋರಿಸುತ್ತವೆ.

**ಹಲವು ಚಟುವಟಿಕೆಗಳ ನಿರ್ವಹಣೆ**

ಇಷ್ಟೊಂದು ಚಟುವಟಿಕೆಗಳನ್ನು ಶಾಲೆಯ ವೇಳಾಪಟ್ಟಿಯಲ್ಲಿ ಹೇಗೆ ಅಳವಡಿಸಬಹುದು ಎಂಬ ಕುತೂಹಲ ಓದುಗರಿಗೆ ಇರಬಹುದು. ಉದಯ್ ಶಾಲೆಗಳು ದಿನಕ್ಕೆ ಆರು ಗಂಟೆಗಳ ಕಾಲ ನಡೆಯುತ್ತವೆ. ಈ ಸಮಯದಲ್ಲಿ ಮಕ್ಕಳಿಗೆ ಔಪಚಾರಿಕ ಶಿಕ್ಷಣವನ್ನು ನೀಡಲಾಗುತ್ತದೆ. ಶಾಲೆಯ ಉಳಿದ ದಿನವನ್ನು ನಾವು ಮೇಲೆ ವಿವರಿಸಿದ ಬಲವರ್ಧನೆ ಚಟುವಟಿಕೆಗಳನ್ನು ಮಾಡುತ್ತಾ ಕಳೆಯಲಾಗುತ್ತದೆ. ಕೆಲವು ವಿಷಯಗಳು ಪ್ರತಿದಿನ ತರಗತಿಗಳನ್ನು ಹೊಂದಿರುತ್ತವೆ, ಕೆಲವು ಸಾಪ್ತಾಹಿಕವಾಗಿ, ಕೆಲವು ಮಾಸಿಕವಾಗಿ ಮತ್ತು ಕೆಲವು ವಾರ್ಷಿಕವಾಗಿ ಸಹ ತರಗತಿಯನ್ನು ಹೊಂದಿರುತ್ತವೆ. ಹೆಚ್ಚಿನ ಕ್ಲಬ್‌ಗಳು ಶಾಲೆಯ ಸಮಯದ ಹೊರಗೆ ಭೇಟಿಯಾಗುತ್ತವೆ ಮತ್ತು ಕೆಲವೊಮ್ಮೆ ವಿದ್ಯಾರ್ಥಿಗಳಿಂದಲೇ ನಿರ್ವಹಿಸಲ್ಪಡುತ್ತವೆ. ಅಗತ್ಯವಿದ್ದಾಗ ಶಿಕ್ಷಕರು ಸಹಾಯ ಮಾಡುತ್ತಾರೆ.

ಎಲ್ಲಾ ಚಟುವಟಿಕೆಗಳನ್ನು ಮಿಶ್ರ-ಲಿಂಗ ಗುಂಪುಗಳಲ್ಲಿ ನಡೆಸಲಾಗುತ್ತದೆ. ಈ ಕೆಲವು ಚಟುವಟಿಕೆಗಳು ವಿಷಯ-ಜ್ಞಾನವನ್ನು ಬಲಲವರ್ಧಿಸುತ್ತವೆ ಮತ್ತು ಇನ್ನು ಕೆಲವು ಕಲಿಕೆಯನ್ನು ಬೆಳೆಸುವ ಮನೋಭಾವವನ್ನು ಅಭಿವೃದ್ಧಿಪಡಿಸುವತ್ತ ಗಮನಹರಿಸುತ್ತವೆ. ಮಕ್ಕಳಿಗೆ ಚಟುವಟಿಕೆಗಳನ್ನು (ಕ್ಲಬ್‌ಗಳಲ್ಲಿ ಇರುವಂತೆ) ಸಂಘಟಿಸುವ ಜವಾಬ್ದಾರಿಯನ್ನು

ನೀಡಿದಾಗ, ನಾಯಕತ್ವ ಮತ್ತು ಸಾಂಸ್ಥಿಕ ಗುಣಗಳು ಹಾಗೂ ಅವರ ತರಗತಿಯ ಕಲಿಕೆಯು ಹೊರಹೊಮ್ಮುತ್ತದೆ ಎಂದು ಗ್ರಾಮೀಣ ಶಿಕ್ಷಣ ಕೇಂದ್ರವು ನಂಬುತ್ತದೆ.

ನಮ್ಮ ವಿಧಾನವನ್ನು ಅರ್ಥಮಾಡಿಸುವ ಪ್ರಮುಖ ತತ್ವವೆಂದರೆ, ಚೌಕಟ್ಟು (ಸ್ಕ್ಯಾಫೋಲ್ಡಿಂಗ್). ಇಲ್ಲಿ ಶಿಕ್ಷಕರು ಮಗುವಿಗೆ ಅವರ ಬೆಳವಣಿಗೆಯ ಕೇಂದ್ರ ಪ್ರದೇಶಗಳಲ್ಲಿ ನಿರ್ಣಾಯಕ ಅಂಶಗಳನ್ನು ಕಲಿಯಲು ಸಹಾಯ ಮಾಡುತ್ತಾರೆ ಮತ್ತು ವಿದ್ಯಾರ್ಥಿಗಳ ದೈನಂದಿನ ಕಲಿಕೆಯ ಯೋಜನೆಯನ್ನು ಈ ರೀತಿ ಕಾರ್ಯರೂಪಕ್ಕೆ ತರಲಾಗುತ್ತದೆ. ಇಲ್ಲಿ ಮುಖ್ಯವಾಗಿ ಶ್ಲಾಘಿಸಬೇಕಾದದ್ದೆಂದರೆ, ಇಲ್ಲಿ ಬಳಸುವ ವಿಧಾನ. ಗ್ರಾಮೀಣ ಶಿಕ್ಷಣ ಕೇಂದ್ರವು ಶಾಲೆಯು ಮಕ್ಕಳಿಗೆ ನೀಡುವ ಶಿಕ್ಷಣದ ಗುಣಮಟ್ಟದ ಮೇಲೆ ಗಮನಾರ್ಹವಾದ ಪರಿಣಾಮವನ್ನು ಬೀರುವ ಈ ಸಹ-ವಿದ್ವತ್ ಚಟುವಟಿಕೆಗಳನ್ನು ಬೋಧನೆ-ಕಲಿಕೆಯ ಪ್ರಕ್ರಿಯೆಯ ಅವಿಭಾಜ್ಯ ಅಂಗವಾಗಿ ನೋಡುತ್ತದೆ. ಇದರರ್ಥ ಅವು ಎಷ್ಟೇ ಸರಳವಾಗಿದ್ದರೂ, ಕೇವಲ ತುರುಕಲ್ಪಟ್ಟ ಚಟುವಟಿಕೆಗಳಾಗದೇ ಪಾಠ ಯೋಜನೆಯ ಭಾಗವಾಗಿರುವಂತೆ ಅವುಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನ ಮತ್ತು ಸಮಯವನ್ನು ಮೀಸಲಿಡಲಾಗುತ್ತದೆ. ಇದರೊಂದಿಗೆ ಪ್ರತಿ ಹಂತದಲ್ಲೂ ಬಲವರ್ಧನೆಯಾಗುವುದನ್ನು ಖಚಿತಪಡಿಸುತ್ತದೆ.

**ಈ ವಿಧಾನವು ಏನನ್ನು ಅರ್ಥೈಸುತ್ತದೆ?**

ನಮ್ಮ ವಿಧಾನದ ಮಹತ್ವವು, ಮಕ್ಕಳು ತರಗತಿಯ ಒಳಗೆ ಮತ್ತು ಹೊರಗೆ ನಡೆಯುವ ಎಲ್ಲವನ್ನೂ ಅರ್ಥಮಾಡಿಕೊಳ್ಳುತ್ತಾರೆ ಮತ್ತು ಇವುಗಳಿಂದ ಆಳವಾದ ಪಾಠಗಳನ್ನು ಪಡೆಯುತ್ತಾರೆ ಎಂದು ಖಚಿತಪಡಿಸಿಕೊಳ್ಳಲು ನೀಡುವ ಪ್ರಾಮುಖ್ಯತೆಯಲ್ಲಿ ಅಡಗಿದೆ. ಉದಾಹರಣೆಗೆ, ವಿಜ್ಞಾನ ವಸ್ತುಪ್ರದರ್ಶನದ ಮಾದರಿಯನ್ನು ಸಂದರ್ಶಕರಿಗೆ ವಿವರಿಸುತ್ತಿದ್ದಾರೆ ಎಂದರೆ ಮಕ್ಕಳಿಗೆ ಅವುಗಳ ಮೂಲ ತತ್ವಗಳು ತಿಳಿದಿವೆ ಮತ್ತು ಅರ್ಥಮಾಡಿಕೊಂಡಿದ್ದಾರೆ ಎಂದಾಗುತ್ತದೆ. ವಾರ್ಷಿಕ ಶಾಲಾ ಪಂಚಾಯತ್, ಪೌರನೀತಿ ವಿಷಯದ ಕಲಿಕೆಯ ಬಲವರ್ಧನೆ ಮಾಡುತ್ತದೆ. ಅಡುಗೆಯ ಕ್ಲಬ್, ಮಕ್ಕಳು ದೇಶದ ವಿವಿಧ ಭಾಗಗಳಿಂದ ಪಾಕವಿಧಾನಗಳ ಜ್ಞಾನವನ್ನು ಪಡೆದು ತಮ್ಮ ತರಕಾರಿ ತೋಟದ ಆರೈಕೆ ಮಾಡುವ ಅವರ ಅನುಭವಗಳನ್ನು ಬೆಂಬಲಿಸುವಂತೆ ಮಾಡುತ್ತದೆ. ಆ ಮೂಲಕ ದೇಶದ ಕುರಿತ ಅವರ ಜ್ಞಾನವು ಶ್ರೀಮಂತಗೊಳ್ಳುತ್ತದೆ. ಕಳೆದುಕೊಂಡರೂ ಸಹ ಸುಧಾರಿಸಿಕೊಂಡು ತನ್ನನ್ನು ತಾನೇ ಸವಾಲು ಮಾಡಿಕೊಳ್ಳುವ ಅಗತ್ಯವನ್ನು ಕ್ರೀಡೆಯು ಬಲವರ್ಧಿಸುತ್ತದೆ - ಈ ಮನೋಧರ್ಮವೂ ಎಲ್ಲಾ ಕಲಿಕೆಗೂ ಅತ್ಯಗತ್ಯವಾಗಿದೆ. ಮಿಶ್ರ-ಲಿಂಗ ತರಗತಿಗಳು ಇಂದಿನ

ಜಗತ್ತಿನಲ್ಲಿ ಬಹಳ ಮುಖ್ಯವಾದ ಸಮಾನತೆ ಮತ್ತು ಪ್ರಜಾಪ್ರಭುತ್ವದ ಕಲ್ಪನೆಗಳ ಬಲವರ್ಧನೆ ಮಾಡುತ್ತವೆ.

**ಕೃತಜ್ಞತೆಗಳು**

ಈ ಲೇಖನಕ್ಕೆ ಜ್ಯೋತ್ಸ್ನಾ ಲಾಲ್ ಅವರು ನೀಡಿದ ಕೊಡುಗೆಯನ್ನು ಲೇಖಕರು ಕೃತಜ್ಞತೆಯಿಂದ ಗುರುತಿಸುತ್ತಾರೆ.

**ಅಂತಿಮ ಟಿಪ್ಪಣಿಗಳು**

---

[i] ರಾಜಸ್ಥಾನದ ಗ್ರಾಮೀಣ ಶಿಕ್ಷಾ ಕೇಂದ್ರವು ರಾಜಸ್ಥಾನದ ಸವಾಯಿ ಮಾಧೋಪುರ್ ಮತ್ತು ಟೋಂಕ್ ಜಿಲ್ಲೆಗಳಲ್ಲಿ ಮಕ್ಕಳು ಮತ್ತು ಅವರ ಪೋಷಕರ ಅಗತ್ಯತೆಗಳು ಮತ್ತು ಆಕಾಂಕ್ಷೆಗಳಿಗೆ ಅನುಗುಣವಾಗಿ ಶಿಕ್ಷಣದ ಪರಿಸರ ವ್ಯವಸ್ಥೆಯನ್ನು ಹೆಚ್ಚು ಅನುಕೂಲಕರವಾಗಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತದೆ. ಕಳೆದ 18 ವರ್ಷಗಳ ಪರ್ಯಾಲೋಚಕ ಮತ್ತು ಕಲಿಕೆಯ ಪ್ರಯಾಣವು ಹಲವಾರು ಉಪಕ್ರಮಗಳನ್ನು ಕೈಗೊಳ್ಳುವಂತೆ ಮಾಡಿದೆ. ಇದರ ಮುಖ್ಯ ಕಾರ್ಯಕ್ರಮವು ಉದಯ್ ಸಮುದಾಯ ಶಾಲೆಗಳ ಸುತ್ತ ಕೇಂದ್ರೀಕೃತವಾಗಿದೆ. ಉದಯ್ ಸಮುದಾಯ ಶಾಲೆಗಳನ್ನು ಆ ಸಮುದಾಯಕ್ಕೆ ಮತ್ತು ಇತರ ಶಾಲೆಗಳಿಗೆ ಗುಣಮಟ್ಟದ ಶಿಕ್ಷಣ ಎಂದರೆ ಏನು ಎಂಬುದನ್ನು ಪ್ರದರ್ಶಿಸಲು ವಿನ್ಯಾಸಗೊಳಿಸಲಾಗಿದೆ.

[ii] ಹಾರ್ವರ್ಡ್ ಮನಶ್ಶಾಸ್ತ್ರಜ್ಞ ಹೊವಾರ್ಡ್ ಗಾರ್ಡ್ನರ್ ಜನರು ಕೇವಲ ಬೌದ್ಧಿಕ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಬದಲಾಗಿ, ಸಂಗೀತ, ಅಂತರ್ವ್ಯಕ್ತೀಯ, ಪ್ರಾದೇಶಿಕ-ದೃಶ್ಯದ ಮತ್ತು ಭಾಷಾ ಬುದ್ಧಿವಂತಿಕೆಗಳನ್ನು ಒಳಗೊಂಡಂತೆ ಅನೇಕ ರೀತಿಯ ಬುದ್ಧಿವಂತಿಕೆಯನ್ನು ಹೊಂದಿದ್ದಾರೆ ಎಂದು ಸಿದ್ಧಾಂತ ರಚಿಸುತ್ತಾರೆ.

ವಿಷ್ಣು ಗೋಪಾಲ್ ಅವರು ರಾಜಸ್ಥಾನದ ಸವಾಯಿ ಮಾಧೋಪುರ್ ನ ಗ್ರಾಮೀಣ ಶಿಕ್ಷಣ ಕೇಂದ್ರದ ನಿರ್ದೇಶಕರಾಗಿದ್ದಾರೆ. ಅವರು ಶಾಲೆಗಳು ಮತ್ತು ಶೈಕ್ಷಣಿಕ ಕಾರ್ಯಕ್ರಮಗಳನ್ನು ನಿರ್ವಹಿಸುವಲ್ಲಿ ಶ್ರೀಮಂತ ಅನುಭವವನ್ನು ಹೊಂದಿದ್ದಾರೆ. ಅವರು ಕ್ರೀಡಾ ಉತ್ಸಾಹಿಯೂ ಹೌದು. ಅವರನ್ನು vishnu.gopal@graminshiksha.org.in ಮೂಲಕ ಸಂಪರ್ಕಿಸಬಹುದು.